## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1474

ಸದಸ್ಯರ ಹೆಸರು : ಶ್ರೀ ಅರವಿಂದಕುಮಾರ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 19.03.2020

ಉತ್ತರಿಸುವ ಸಚಿವರು : ಗೃಹ ಸಚಿವರು.

| ಕ್ರ.ಸ | ಪ್ರಶ್ನೆ | ಉತ್ತರ |
| --- | --- | --- |
| ಅ | ಬೀದರ ಜಿಲ್ಲೆಯಲ್ಲಿರುವ ಶಾಹೀನ ಶಿಕ್ಷಣ ಸಂಸ್ಥೆಯಲ್ಲಿ ಪ್ರದರ್ಶನಗೊಂಡ ನಾಟಕವನ್ನು ಪತ್ರಕರ್ತರೊಬ್ಬರು ಅವರ ಫೇಸ್ ಬುಕ್‌ನಲ್ಲಿ ನೇರ ಪ್ರಸಾರ ಮಾಡಿರುವುದು ಸರಿಯೇ; | ದಿನಾಂಕ 26-01-2020 ರಂದು ಶ್ರೀ ನಿಲೇಶ ರಕ್ಷಾಳ ಸಾ: ಬೀದರ ರವರು ನೂತನ ನಗರ ಪೊಲೀಸ್ ಠಾಣೆಗೆ ಹಾಜರಾಗಿ ನೀಡಿದ ಲಿಖಿತ ದೂರಿನ ಸಾರಾಂಶದ ಮೇರೆಗೆ ಶಾಹೀನ್ ಕಾಲೇಜನಲ್ಲಿ ನಡೆದ ನಾಟಕ ಪ್ರದರ್ಶನದಲ್ಲಿ ದೇಶದ ಮೇಲೆ ದ್ವೇಷ ಭಾವನೆ ಬರುವಂತಹ ಹಾಗೂ ಇತರೆ ಘಟನೆ ಜರುಗಿದೆ, ಅದನ್ನು ಸಾಮಾಜಿಕ ಜಾಲತಾಣವಾದ ಫೇಸ್‌ಬುಕ್‌ನಲ್ಲಿ ಹರಿಬಿಟ್ಟು ಜನಾಂಗೀಯ ದ್ವೇಷ ಹಾಗೂ ಎರಡು ಕೋಮುಗಳ ಮಧ್ಯ ಭಯ ಭೀತಿ ಉಂಟು ಮಾಡಿ ಧಾರ್ಮಿಕ ಭಾವನೆಗೆ ಧಕ್ಕೆ ತರುವ ಕೃತ್ಯ ಎಸಗಿರುತ್ತಾರೆ ಅಂತಾ ದೂರನ್ನು ನೀಡಿದ್ದು, ದೂರಿನ ಘಟಕಾಂಶಗಳ ಆಧಾರದ ಮೇಲೆ ಅಪರಾಧ ಸಂ. 10/2020 ಕಲಂ. 504, 505(2), 124(ಎ), 153(ಎ), ಜೊತೆ 34 ಐಪಿಸಿ ಅಡಿಯಲ್ಲಿ ಪ್ರಕರಣ ದಾಖಲಿಸಲಾಗಿದೆ. ಪ್ರಕರಣ ತನಿಖೆಯಲ್ಲಿದೆ. |
| ಆ | ಸರಿಯಿಲ್ಲದಿದ್ದಲ್ಲಿ ಅದಕ್ಕೆ ಆಧಾರ ನೀಡುವುದು; | ಸದರಿ ಪ್ರಕರಣದ ತನಿಖೆ ಪ್ರಗತಿಯಲ್ಲಿದ್ದು, ಪ್ರಕರಣದಲ್ಲಿ ಇನ್ನು ದೋಷಾರೋಪಣ ಪಟ್ಟಿ ಸಲ್ಲಿಸಿರುವುದಿಲ್ಲ. ಪ್ರಕರಣವು ತನಿಖಾ ಹಂತದಲ್ಲಿರುವುದರಿಂದ ವಿಷಯವು ವಿಚಾರಣಾಧೀನ (subjudice) ವಾಗಿರುತ್ತದೆ. |
| ಇ | ಇದು ಪತ್ರಿಕಾ ರಂಗದ ಸ್ವಾತಂತ್ರಕ್ಕೆ ಧಕ್ಕೆ ಉಂಟು ಮಾಡಿದಂತಲ್ಲವೇ; ಈ ಪತ್ರಕರ್ತರ ಮೇಲೆ ದಾಖಲಾದ ಪ್ರಕರಣಗಳನ್ನು ಹಿಂಪಡೆಯುವ ಉದ್ದೇಶ ಸರ್ಕಾರಕ್ಕೆ ಇದೆಯೇ? | |

ಹೆಚ್‌ಡಿ 56 ಎಸ್‌ಎಸ್‌ಟಿ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು